# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 167

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 16.07.2019

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಪ್ರಶ್ನೆ | ಉತ್ತರ |
|---|---|
| (ಅ) ಶಾಲಾ ಮಕ್ಕಳ ಸಮವಸ್ತ್ರಗಳ ವಿತರಣೆಯಲ್ಲಿ ಆಗಿರುವ ಅಕ್ರಮಗಳ ಬಗ್ಗೆ ಮಹಾಲೆಕ್ಕ ಪರಿಶೋಧಕರು (CAG) ನೀಡಿರುವ ವರದಿಯ ಮೇಲೆ ಸರ್ಕಾರ ಕೈಗೊಂಡ ಕ್ರಮವೇನು; | ಸಿ.ಎ.ಜಿ ಆಡಿಟ್ ವರದಿಯ ಆಕ್ಷೇಪಣೆಯಲ್ಲಿನ ಅಂಶಗಳಂತೆ ಸಮವಸ್ತ್ರ ಸರಬರಾಜು ಮತ್ತು ಉಳಿಕೆ ಬಗ್ಗೆ ವಿವರವಾದ ವರದಿಯನ್ನು ಪಡೆಯಲು ತಪಾಸಣಾ ತಂಡಗಳನ್ನು ರಚಿಸಿ ತಪಾಸಣೆ ನಡೆಸಲಾಗಿದೆ.<br>ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿ ಸಭೆಯ ನಿರ್ದೇಶನದಂತೆ ಸಮವಸ್ತ್ರ ಸರಬರಾಜು, ವಿತರಣೆ ಮತ್ತು ದಾಸ್ತಾನಿನ ವ್ಯತ್ಯಾಸದ ಕುರಿತು ಬಾಗಲಕೋಟೆ, ಗದಗ, ಬಳ್ಳಾರಿ ಮತ್ತು ಚಿಕ್ಕೋಡಿ ಜಿಲ್ಲಾ ಉಪ ನಿರ್ದೇಶಕರಿಗೆ ಕಾರಣ ಕೇಳಿ ನೋಟೀಸ್ ಜಾರಿಗೊಳಿಸಲಾಗಿತ್ತು.<br>ಪ್ರಸ್ತುತ ಗದಗ, ಮತ್ತು ಚಿಕ್ಕೋಡಿ ಜಿಲ್ಲಾ ಉಪ ನಿರ್ದೇಶಕರಿಂದ ವರದಿ ಬಂದಿದ್ದು, ಬಾಗಲಕೋಟೆ ಮತ್ತು ಬಳ್ಳಾರಿ ಜಿಲ್ಲಾ ಉಪ ನಿರ್ದೇಶಕರಿಂದ ವರದಿ ನಿರೀಕ್ಷಿಸಲಾಗಿದ್ದು, ಮಾಹಿತಿ/ವರದಿ ಬಂದ ನಂತರ ಪರಿಶೀಲಿಸಿ ನಿಯಮಾನುಸಾರ ಕ್ರಮ ವಹಿಸಲಾಗುತ್ತದೆ. |
| (ಆ) ರಾಜ್ಯ ಸರ್ಕಾರದ ವಿದ್ಯಾವಿಕಾಸ ಯೋಜನೆಯಡಿಯಲ್ಲಿ ಸರ್ಕಾರಿ ಶಾಲಾ ಮಕ್ಕಳಿಗೆ ಉಚಿತವಾಗಿ ಸಮವಸ್ತ್ರವನ್ನು ಯಾವ ವರ್ಷದಿಂದ ಹಂಚಿಕೆ ಮಾಡಲಾಗುತ್ತಿದೆ; | ರಾಜ್ಯ ಸರ್ಕಾರದ ವಿದ್ಯಾ ವಿಕಾಸ ಯೋಜನೆಯಡಿಯಲ್ಲಿ ಸರ್ಕಾರಿ ಶಾಲಾ ಮಕ್ಕಳಿಗೆ ಉಚಿತವಾಗಿ ಸಮವಸ್ತ್ರವನ್ನು 1984-85 ನೇ ಸಾಲಿನಿಂದ ಹಂಚಿಕೆ ಮಾಡಲಾಗುತ್ತಿದೆ. |
| (ಇ) 2015-16, 2016-17 ಮತ್ತು 2018-19ನೇ ಸಾಲಿನವರೆಗೆ ಸರ್ಕಾರಿ ಶಾಲೆಯಲ್ಲಿ ಒಟ್ಟು ನೋಂದಣಿಯಾದ ಮಕ್ಕಳ ಸಂಖ್ಯೆ ಎಷ್ಟು? | 2015-16, 2016-17, 2018-19ನೇ ಸಾಲಿನಲ್ಲಿ ಸರ್ಕಾರಿ ಶಾಲೆಗಳಲ್ಲಿ ನೋಂದಣಿಯಾದ ಮಕ್ಕಳ ಸಂಖ್ಯೆ ಈ ಕೆಳಕಂಡಂತಿದೆ. |

| ವರ್ಷ | ಮಕ್ಕಳ ಸಂಖ್ಯೆ |
|---|---|
| 2015-16 | 47.45 ಲಕ್ಷ |
| 2016-17 | 46.50 ಲಕ್ಷ |
| 2018-19 | 43.61 ಲಕ್ಷ |

...2

| ಪ್ರಶ್ನೆ | ಉತ್ತರ |
|---|---|
| (ಈ) ಈ ಸಾಲಿನಲ್ಲಿ ಪ್ರತಿ ವರ್ಷ ಒಟ್ಟು ವಿತರಣೆ ಮಾಡಲಾದ ಸಮವಸ್ತ್ರಗಳ ಸಂಖ್ಯೆ ಎಷ್ಟು; (ವಿವರವಾದ ಮಾಹಿತಿಯನ್ನು ನೀಡುವುದು) | 2015-16, 2016-17, 2018-19ನೇ ಸಾಲಿನಲ್ಲಿ ವಿತರಿಸಲಾದ ಸಮವಸ್ತ್ರಗಳ ಸಂಖ್ಯೆ ಈ ಕೆಳಕಂಡಂತಿದೆ.<br><br>ವರ್ಷ — ವಿರಿಸಿದ ಸಮವಸ್ತ್ರಗಳ ಸಂಖ್ಯೆ<br>2015-16 — 52.73 ಲಕ್ಷ<br>2016-17 — 49.44 ಲಕ್ಷ<br>2018-19 — 44.57 ಲಕ್ಷ<br><br>ಪ್ರತಿ ವರ್ಷವೂ ಶಾಲೆಗಳು ಪ್ರಾರಂಭವಾಗುವ ವೇಳೆಗೆ ಅಂದರೆ ಜೂನ್‌ನಲ್ಲಿ ಸಮವಸ್ತ್ರ ಸರಬರಾಜು ಪೂರ್ಣಗೊಳಿಸಬೇಕಿರುತ್ತದೆ. ಡೈಸ್ ಮಾಹಿತಿಯು ಚಾಲ್ತಿ ವರ್ಷದ ಡಿಸೆಂಬರ್ ಮಾಹೆಯಲ್ಲಿ ಲಭ್ಯವಿರುತ್ತದೆ ಹಾಗೂ ಸಮವಸ್ತ್ರ ಸರಬರಾಜಿನ ಕಾರ್ಯಾದೇಶವನ್ನು ಹಿಂದಿನ ವರ್ಷದ ನವೆಂಬರ್-ಡಿಸೆಂಬರ್‌ನಲ್ಲಿ ನೀಡಲಾಗಿರುತ್ತದೆ. ಹೀಗಾಗಿ ಮಕ್ಕಳ ಸಂಖ್ಯೆಯನ್ನು ಅಂದಾಜು ಮಾಡಿ ಸರಬರಾಜು ಮಾಡಲಾಗಿರುವುದರಿಂದ ಮಕ್ಕಳ ಸಂಖ್ಯೆ ಮತ್ತು ಸಮವಸ್ತ್ರ ಸರಬರಾಜು ಸಂಖ್ಯೆಯಲ್ಲಿ ವ್ಯತ್ಯಾಸ ಕಂಡುಬಂದಿರುತ್ತದೆ. |
| (ಉ) ಶಾಲಾ ಮಕ್ಕಳ ನೋಂದಣಿಗಿಂತ ಹೆಚ್ಚಾಗಿ ಸಮವಸ್ತ್ರಗಳನ್ನು ಖರೀದಿಸಿ, ಸರ್ಕಾರದ ಬೊಕ್ಕಸಕ್ಕೆ ಸುಮಾರು 7.2 ಕೋಟಿ ರೂಪಾಯಿಗಳ ಅವ್ಯವಹಾರ ನಡೆದಿದೆ ಎಂದು ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಈ ಬಗ್ಗೆ ಕೈಗೊಂಡ ಕ್ರಮವೇನು? (ವಿವರ ನೀಡುವುದು) | ಬಂದಿದೆ.<br>ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕ ಲೆಕ್ಕ ಪತ್ರಗಳ ಸಮಿತಿ ಸಭೆಯ ನಿರ್ದೇಶನದಂತೆ ಸಮವಸ್ತ್ರ ಸರಬರಾಜು, ವಿತರಣೆ ಮತ್ತು ದಾಸ್ತಾನಿನ ವ್ಯತ್ಯಾಸದ ಕುರಿತು ಬಾಗಲಕೋಟೆ, ಗದಗ, ಬಳ್ಳಾರಿ ಮತ್ತು ಚಿಕ್ಕೋಡಿ ಜಿಲ್ಲಾ ಉಪ ನಿರ್ದೇಶಕರಿಗೆ ಕಾರಣ ಕೇಳಿ ನೋಟೀಸ್ ಜಾರಿಗೊಳಿಸಲಾಗಿತ್ತು.<br>ಪ್ರಸ್ತುತ ಗದಗ, ಮತ್ತು ಚಿಕ್ಕೋಡಿ ಜಿಲ್ಲಾ ಉಪ ನಿರ್ದೇಶಕರಿಂದ ವರದಿ ಬಂದಿದ್ದು, ಬಾಗಲಕೋಟೆ ಮತ್ತು ಬಳ್ಳಾರಿ ಜಿಲ್ಲಾ ಉಪ ನಿರ್ದೇಶಕರಿಂದ ವರದಿ ನಿರೀಕ್ಷಿಸಲಾಗಿದ್ದು, ಮಾಹಿತಿ/ವರದಿ ಬಂದ ನಂತರ ಪರಿಶೀಲಿಸಿ ನಿಯಮಾನುಸಾರ ಕ್ರಮ ವಹಿಸಲಾಗುತ್ತದೆ. |

ಸಂಖ್ಯೆ: ಇಪಿ 57 ಯೋಯೋಕ 2019

(ಎಸ್.ಆರ್.ಶ್ರೀನಿವಾಸ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು